ಶ್ರೀ.

ದಿವಾಣ ಬಹಾದ್ದೂರ

# ಶ್ರೀನಿವಾಸರಾವ ರೊದ್ದ

ಸಿ. ಆಯ್. ಇ.,

ಈ ಮಹನೀಯರ

# ಚರಿತ್ರೆಯು.



ಷ್ಣಾಜಿ ವೆಂಕಟೇಶ ಕುಲಕರ್ಣಿ

ಬಿ. ಎ.

ರ್ಯದರ್ಶಿ,

ಕರ್ನಾಟಕ ವಿದ್ಯಾವರ್ಧಕ ಸಂಘ,

ಧಾರವಾಡ.

---

ಸನ್ನ ೧೯೨೫.

ಕನ್ನಡದ ಅಭಿಮಾನಿಗಳೂ ಕರ್ನಾಟಕದ ರಾಜ ಪ್ರಜಾಮಾನ್ಯರಲ್ಲಿ ಅಗ್ರ
ಗಣ್ಯರೂ ಕ. ವಿ. ವ. ಸಂಘದ ಆಜೀವ ಸಭಾಸದರೂ ಕೆಲಕಾಲ
ಉಪಾಧ್ಯಕ್ಷರೂ ಆದ

ದಿವಾನ ಬಹದ್ದೂರ್ ರೊದ್ದ ಶ್ರೀನಿವಾಸರಾಯರು, C.I.E.

ಜನ್ಮ :—ಸಪ್ಟಂಬರ ೧೮೫೦.



# ದಿವಾಣ ಬಹಾದ್ದೂರ

# ಶ್ರೀನಿವಾಸರಾವ ರೊದ್ದ, ಸಿ. ಆಯ್. ಇ. ಯವರು.



व्यतिकरितदिगंताः श्वेतमानैर्यशोभिः ।
सुकृतविलसितानां स्थानमूर्जस्वलानाम् ।
अकलितमहिमानः केतनं मंगलानाम् ।
कथमपि भुवनेऽस्मिन् तादृशाः संभवंति ॥

ಮಹನೀಯರ ಚರಿತ್ರೆಗಳು ಯಾವಾಗಲೂ ಬೋಧಪ್ರದವಾಗಿರುವವೆಂಬ ಮಾತು ನಿಜ. ಮಹನೀಯರಾದ ವಿಭೂತಿಗಳು ಕಾಲಕಾಲಕ್ಕೆ ಹುಟ್ಟುವದರಿಂದಲೇ ಜನಾಂಗವು ಮುಂದೆ ಬರಲನುವಾಗುವದು. ಅವರ ಬೋಧದಿಂದ, ವಿಚಾರಗಳಿಂದ ಹಾಗೂ ಪ್ರತ್ಯಕ್ಷ ಕೃತಿಯ ಪರಿಣಾಮದಿಂದ ಸಮಾಜದಲ್ಲಿ ಸಂಸ್ಕೃತಿಯುಂಟಾಗಿ ಸಮಾಜವೂ ಕೂಡ ಕರ್ತವ್ಯದಕ್ಷವಾಗುವದು. ಅವರ ಜೀವಿತಕಾರ್ಯಗಳ ಸತ್ಪರಿಣಾಮಗಳು ಕೇವಲ ಅವರ ಕಾಲದಲ್ಲಿಯೇ ಅಲ್ಲದೆ ಅವರ ತರುವಾಯ ಕಾಲದಲ್ಲಿಯೂ ಬಹುಕಾಲ ಉಳಿಯುವವು. ಹೀಗಾಗಿ, ವಿಭೂತಿಗಳ ಚರಿತ್ರೆಯನ್ನು ಲಕ್ಷಗೊಟ್ಟು ಅಭ್ಯಾಸಿಸುವದು ಬಹು ಮಹತ್ವದ್ದಾಗಿರುತ್ತದೆ. ಈ ತರದ ಅಭ್ಯಾಸದಿಂದ ಮನಸ್ಸು ಸುಸಂಸ್ಕೃತವಾಗಿ ಅವರಂತೆ ಮಹತ್ಕಾರ್ಯಗಳನ್ನು ಮಾಡಲು ಸ್ಫೂರ್ತಿಯೂ ಉತ್ಸಾಹವೂ ಉಂಟಾಗದಿರವು.

ಸದ್ಯಕಾಲದಲ್ಲಿ ಕರ್ಣಾಟಕದೇಶದ ಇತಿಹಾಸವನ್ನು ಅಭ್ಯಸಿಸುವದೇನೋ ಅವಶ್ಯಕವಾಗಿ ಕೂತಿದೆ. ಅದರಲ್ಲಿಯೂ "ಕರ್ನಾಟಕದೇಶ, ಕರ್ನಾಟಕ ಜನಾಂಗ ಎಂಬದೊಂದು ವ್ಯಕ್ತಿದೃಷ್ಟಿಯಿಂದ, ಕರ್ನಾಟಕ ಜನಜೀವನ, ಧಾರ್ಮಿಕ, ನೈತಿಕ, ಮಾನಸಿಕ ಉನ್ನತಾವನತ ದೃಷ್ಟಿಯಿಂದ, ಸರಳವಾದ, ನಿಷ್ಪಕ್ಷಪಾತವಾದ ಸಂಪೂರ್ಣ ಪ್ರತಿಭಾದರ್ಶಕವಾದ ಇತಿಹಾಸದೃಷ್ಟಿಯಿಂದ ಇದುವರೆಗೆ ಯಾರೂ ಕರ್ನಾಟಕದೇಶದ ಚರಿತ್ರೆಯನ್ನು ಬರೆಯಲು ಪ್ರಯತ್ನಿಸಲಿಲ್ಲ. ನಿರೀಹರಾದ, ನಿರ್ಜೀವಿಗಳಾದ, ನೀತಿರಹಿತರಾದ, ಕಾರ್ಯಾರಂಭ ಗುಣಶೂನ್ಯರಾದ, ಛಿದ್ರಛಿದ್ರರಾದ ಕನ್ನಡಿಗರು ಮತ್ತೆ ನೀತಿಯುತರೂ, ಸಜೀವಿಗಳೂ ಆಗಬೇಕಾಗಿದ್ದರೆ ತಮ್ಮ ಪ್ರಾಚೀನ ಇತಿಹಾಸಪಠನವು ಅವರಿಗೆ ಅವಶ್ಯಕ; ತಮ್ಮ ಪ್ರಾಚೀನ ವಿಭೂತಿಗಳ ಜೀವನಪರಿಚಯವು ಅವರಿಗೆ ಅತ್ಯವಶ್ಯಕ; ತಮ್ಮ ದೇಶದ ಚೆಲುವಿನರಿವು ಅವರಿಗೆ ಅತ್ಯಂತಾವಶ್ಯಕ." ಕರ್ನಾಟಕ ದೇಶ, ಕರ್ನಾಟಕ ಜನಾಂಗ, ಕರ್ನಾಟಕದ ಪ್ರಾಚೀನ ಇತಿಹಾಸ, ಕರ್ನಾಟಕದ ಪ್ರಾಚೀನ ವಿಭೂತಿಗಳ ಜೀವನಪರಿಚಯ—ಇವೇ ಮೊದಲಾದ ವಿಷಯಗಳ ಅಭ್ಯಾಸವು ಎಷ್ಟು ಅವಶ್ಯಕವಾಗಿರುವದೋ, ಅಷ್ಟೇ ಕಿಂಬಹುನಾ, ಅದಕ್ಕೂ ಹೆಚ್ಚು, ಅರ್ವಾಚೀನ ಇತಿಹಾಸವೂ ಅರ್ವಾಚೀನ ಕಾಲದ—ನಾವು ಜೀವಿಸುತ್ತಿರುವ ವರ್ತಮಾನಕಾಲದ—

ಮಹಾಪುರುಷರ ಚರಿತ್ರೆಗಳೂ ಅವಶ್ಯಕವಾಗಿರುವವೆಂದರೆ ಅತಿಶಯೋಕ್ತಿಯೇನೂ ಆಗದು. ಕರ್ನಾಟಕದ ಗತವೈಭವವೆಂತಹದೋ ಅದೊತ್ತಟ್ಟಿಗಿರಲಿ, ಪೇಶವೆಯರ ವಿನಾಶಕಾಲದಿಂದೀಚೆಗೆ, ಹೆಚ್ಚು ಕಡಿಮೆ, ಒಂದು ನೂರು ವರ್ಷಗಳ ಗತಿಸಿಹೋದ ಕಾಲದಲ್ಲಿ, ಅಜ್ಞಾನಾಂಧಕಾರದಲ್ಲಿ ಸಿಲುಕಿ ತನ್ನರಿವು ತನಗಿಲ್ಲದಂತಾಗಿ ಛಿನ್ನ ವಿಚ್ಛಿನ್ನ ವಾಗಿದ್ದು ಇದೀಗ ತಲೆಯನ್ನು ಮೇಲೆತ್ತಲು ನೋಡುತ್ತಿರುವ ತತ್ಕಾಲೀನ ಕರ್ನಾಟಕದ ಇತಿಹಾಸಪಠನದ ಅವಶ್ಯಕತೆಯನ್ನು ಎಷ್ಟು ಬಣ್ಣಿಸಿದರೂ ಸಾಲದು. ಈ ಕಾಲದಲ್ಲಿ ಆಗಿಹೋದ, ಅದು ಏಕೆ, ಈಗಲೂ ದೇಶಕಲ್ಯಾಣದ ಕಾರ್ಯಭಾರವನ್ನು ನಿರ್ವಹಿಸಿ ಕೃತಾರ್ಥರಾಗಿರುವ ಪುಣ್ಯಪುರುಷರ ಜೀವಿತಚರಿತ್ರೆಗಳ ಪಠನವಂತೂ ತೀರ ಅವಶ್ಯಕ ವಿಷಯವೆಂದು ಹೇಳಬೇಕಾಗಿಲ್ಲ.

ಇಂಥ ಪುಣ್ಯಶ್ಲೋಕರಲ್ಲಿ ನಮ್ಮ ಚರಿತ್ರನಾಯಕರಾದ ದಿ. ಬ. ಶ್ರೀನಿವಾಸ ರಾಯರು ಮೇಲ್ಪಂಕ್ತಿಯಲ್ಲಿ ಬರುವರು. ಕೇವಲ ಸಾಮಾನ್ಯ ಸ್ಥಿತಿಯಲ್ಲಿ ಹುಟ್ಟಿ ಬೆಳೆದು, ಸ್ವಯಂ ಖ್ಯಾತರಾಗಿ ಸಾಮಾನ್ಯ ಜನತೆಯ ಪ್ರೀತಿಗೆ ಪಾತ್ರರಾಗಿ, ಅಸಾಮಾನ್ಯ ಗುಣಗಳ ಪ್ರಭಾವದಿಂದ ಅಸಾಮಾನ್ಯರೂ ಲೋಕೋತ್ತರ ಪುರುಷರೂ ಆಗಿ ಸಾಮಾನ್ಯಜನತೆಯ ಕಲ್ಯಾಣಕ್ಕಾಗಿ ತಾವು ಕೈಕೊಂಡ ಕಾರ್ಯಭಾರವನ್ನು ಯಥಾರೀತಿಯಾಗಿ ನಿರ್ವಹಿಸಿ ಈಡೇರಿಸಿ ಅದರ ಪ್ರತ್ಯಕ್ಷ ಫಲಗಳನ್ನು ನೋಡುತ್ತಿರುವ ಧನ್ಯಪುರುಷರಲ್ಲಿ ದಿ. ಬ. ರವರು ಹೆಸರುಪಡೆದವರು. ಇವರ ವಯಸ್ಸು ಈಗ ೭೫ಕ್ಕೆ ಮಿಕ್ಕಿ ಹೋಗಿದ್ದು, ಇವರು ತಮ್ಮ ಆಯುಷ್ಯದ ಮಹತ್ತಮಭಾಗವನ್ನು—ಏನಿಲ್ಲೆಂದರೂ ೫೦ ವರ್ಷಗಳನ್ನು—ಪರ್ಯಾಯದಿಂದಾಗಲೀ ಪ್ರತ್ಯಕ್ಷವಾಗಿಯಾಗಲೀ ಸಾರ್ವಜನಿಕ ಕಾರ್ಯಗಳಲ್ಲಿ ಕಳೆದಿದ್ದು ಈ ೫೦ ವರ್ಷಗಳ ಇವರ ಜೀವಿತದ ಇತಿಹಾಸವು ಬಹ್ವಂಶದಲ್ಲಿ ಕರ್ನಾಟಕದ ಈ ಭಾಗದ ಇತಿಹಾಸವೇ ಆಗಿರುವದೆಂದು ಧಾರಾಳವಾಗಿ ಹೇಳಬಹುದು. ಆದುದರಿಂದ ಇಂಥ ಮಹಾಪುರುಷರ ಚರಿತ್ರವನ್ನು ಪಠಿಸುವದು ಕನ್ನಡಿಗರಿಗೆ ಭೂಷಣವೇ ಸರಿ.

ದಿ. ಬ. ಶ್ರೀನಿವಾಸರಾಯರು ಕರ್ನಾಟಕ ವೈಷ್ಣವ ಬ್ರಾಹ್ಮಣರು. ಇವರ ಅಜ್ಜಂದಿರಾದ ತಿರುಮಲರಾಯರು ಬಳ್ಳಾರೀ ಜಿಲ್ಹೆಯಲ್ಲಿ ಪೆನಗುಂಡೀ ತಾಲೂಕಿನಲ್ಲಿ ರೊದ್ದ ಎಂಬ ಊರ ನಿವಾಸಿಗಳು. ಇವರಿಗೆ ಕೋನ್ಹೇರರಾಯರೆಂಬವರೊಬ್ಬ ಮಕ್ಕಳು ಇದ್ದರು. ಕೋನ್ಹೇರರಾಯರು ಚಿಕ್ಕವರಿದ್ದಾಗ ತಾಯಿಯು ತೀರಿಕೊಳ್ಳಲು, ಇವರ ದೂರಿನ ಕಕ್ಕಿಯವರೊಬ್ಬರು ಇವರನ್ನು ಧಾರವಾಡಕ್ಕೆ ಕರೆದುಕೊಂಡು ಬಂದು ಸಂರಕ್ಷಣೆ ಮಾಡಿದರು. ಕೋನ್ಹೇರರಾಯರಿಗೆ ಧಾರವಾಡದಲ್ಲಿಯೇ ಮೋಜಣೀಖಾತೆಯಲ್ಲಿ ಕೆಲಸವಾಯಿತು. ಅವರು ಧಾರ್ಮಿಕರೂ ಕರ್ಮನಿಷ್ಠರೂ ಆಗಿದ್ದರಿಂದ, ತಿರುಗಾಡುವ ಕೆಲಸಕ್ಕೆ ಒಪ್ಪಿಕೊಳ್ಳದೆ ಧಾರವಾಡದಲ್ಲಿಯೇ ಇದ್ದು ೧೫-೨೦ ರೂಪಾಯಿ ಸಂಬಳದ ಮೇಲೆ ದಪ್ತರಿನ ಕೆಲಸಮಾತ್ರ ನೋಡಿಕೊಳ್ಳಹತ್ತಿದರು. ಕೋನ್ಹೇರರಾಯರ ಮಕ್ಕಳೇ ನಮ್ಮ ಚರಿತ್ರೆನಾಯಕರಾದ ಶ್ರೀನಿವಾಸರಾಯರು—ಇವರು ೧೮೫೦ನೇ ಇಸವಿಯ

ಸಪ್ಟಂಬರ ೧೭ನೇ ತಾರೀಖಿನ ದಿವಸ ಧಾರವಾಡ ಶಹರಕ್ಕೊಳಪಟ್ಟಿರುವ ಮದೀಹಾಳ ಗ್ರಾಮದಲ್ಲಿ ಹುಟ್ಟಿದರು. ರಾಯರ ಪ್ರಾಥಮಿಕ ಶಿಕ್ಷಣವು ಹತ್ತುವರ್ಷದವರೆಗೆ ಮದೀಹಾಳದಲ್ಲಿಯೇ ಆಯಿತು. ಮುಂದೆ ಎರಡು ವರ್ಷಗಳವರೆಗೆ ಧಾರವಾಡದ ಮಿಶನ್ ಸ್ಕೂಲಿನಲ್ಲಿ ಇಂಗ್ಲಿಷ ಕಲಿತರು. ಹೆಚ್ಚಿನ ಅಭ್ಯಾಸದ ಸೌಲಭ್ಯವು ಧಾರವಾಡದಲ್ಲಿಲ್ಲದಂತಾಯಿತು; ಬೇರೆ ಕಡೆಗೆ ಹೋಗಲಿಕ್ಕೆ ಹಿರಿಯರ ಒಪ್ಪಿಗೆಯಿಲ್ಲದಂತಾಯಿತು. ಇದೇ ಕಾಲಕ್ಕೆ ಹಿರಿಯರು ತೀರಿಕೊಂಡರು. ಅಭ್ಯಾಸದ ಲವಲವಿಕೆಯು ದೂರ ಉಳಿದು, ಉಪಜೀವನದ ಮಾರ್ಗವನ್ನು ಹುಡುಕಬೇಕಾಯಿತು. ಹೀಗಾಗಿ, ಇವರು ಮದೀಹಾಳದಲ್ಲಿ ಗಾವಠೀ ಶಾಲೆಯನ್ನು ಹಾಕಿ ಮಾಸ್ತರರಾದರು. ಮುಂದೆ ಕೆಲವು ದಿವಸಗಳ ಮೇಲೆ ಹುಬ್ಬಳ್ಳಿಯ ಮಿಶನ್‌ಸ್ಕೂಲಿನಲ್ಲಿ ಇವರಿಗೆ ೧೫ ರೂ. ಯ ಮೇಲೆ ಅಸಿಸ್ಟಂಟ ಮಾಸ್ತರರ ಸ್ಥಳವು ದೊರೆಯಿತು. ಆಗ ಇವರು ಕೇವಲ ತಾರುಣ್ಯದ ಬಲದಿಂದ ಧಾರವಾಡದಿಂದ ಹುಬ್ಬಳ್ಳಿಗೆ ದಿನಾಲು ಕಾಲುನಡಿಗೆಯಿಂದ ಹೋಗಿ ತಿರುಗಿ ಬರುತ್ತಿದ್ದರು.

ಮಿಶನ್‌ಸ್ಕೂಲಿನಲ್ಲಿ ಉತ್ತೇಜನ ದೊರೆಯುವದು ಅಸಾಧ್ಯವೆಂದು ಬಗೆದು ರಾಯರು ಬೇರೆ ಮಾರ್ಗಗಳನ್ನು ಹುಡುಕಹತ್ತಿದರು. ಪ್ರಯತ್ನಮಾಡುತ್ತಿರಲು, ಆ ಕಾಲದ ಎ. ಇ. ರಾದ ಮಿ. ರಸೆಲ್‌ಸಾಹೇಬರು ಇವರನ್ನು ಬೆಳಗಾವಿಯ ಟ್ರೇನಿಂಗ ಕಾಲೇಜಕ್ಕೆ ಕಳಿಸಿದರು. ಅಲ್ಲಿ ಇವರು ತಮ್ಮ ವೇತನವಲ್ಲದೆ ತಿಂಗಳೊಂದಕ್ಕೆ ೧೫ ರೂಪಾಯಿಗಳನ್ನು ಖಾಸಗಿ ಶಿಕ್ಷಣಕೊಟ್ಟು ಸಂಪಾದಿಸುತ್ತಿದ್ದರು. ಕಾಲಪರಿಸ್ಥಿತಿಗನುಸರಿಸಿ ಪ್ರಯತ್ನಗಳನ್ನು ಮಾಡುತ್ತಿದ್ದ ಶ್ರೀನಿವಾಸರಾಯರು ಮುಂದೆ ಕಾಲೋಚಿತವಾಗಿ ಅದೇ ಟ್ರೇನಿಂಗ ಕಾಲೇಜದ ಮುಖ್ಯಾಧ್ಯಾಪಕರಾದದ್ದೇನಾಶ್ಚರ್ಯ ?

ಟ್ರೇನಿಂಗ ಕಾಲೇಜದಲ್ಲಿ ಒಂದೇ ವರ್ಷ ಅಭ್ಯಾಸಮಾಡಿ, ಚಿಕ್ಕವರಿದ್ದದರಿಂದ ಆಗಲೇ ಮಾಸ್ತರರ ಕೆಲಸವನ್ನು ಅಂಗೀಕರಿಸದೆ ಕೆಲದಿನ ಮನೆಯಲ್ಲಿ ಅಭ್ಯಾಸಮಾಡಿ, ಮುಂದೆ ಒಂದು ವರ್ಷ ರಸೆಲ್‌ಸಾಹೇಬರ ಪ್ರೋತ್ಸಾಹನದಿಂದ ಪುಣೆಯ ಹಾಯ ಸ್ಕೂಲಿನಲ್ಲಿ ಕಲಿತು ೧೮೭೦ನೇ ಇಸವಿಯಲ್ಲಿ ರಾಯರು ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ವರ್ಡ್ಸ್‌ವರ್ಥ ಸಾಹೇಬರ ಆದರಕ್ಕೆ ಪಾತ್ರರಾಗಿ ಎರಡು ವರ್ಷಗಳ ವರೆಗೆ ಡೆಕ್ಕನ ಕಾಲೇಜದಲ್ಲಿ ಅಭ್ಯಾಸ ಬೆಳೆಸಿದರು. ಈ ಅವಧಿಯಲ್ಲಿ ಶ್ರೀನಿವಾಸರಾಯರ ಲಗ್ನವಾಯಿತು. ಮುಂದೆ ಅಲ್ಪಕಾಲದಲ್ಲಿಯೇ ಇವರ ಮಾವಂದಿರು ದಿವಂಗತರಾಗಲು, ತಾಯಿಯನ್ನೂ ಹೆಂಡತಿಯನ್ನೂ ಸಂರಕ್ಷಣೆಮಾಡುವ ಭಾರವು ರಾಯರ ಮೇಲೆ ಬೀಳಲು, ಅಭ್ಯಾಸವನ್ನು ಅಷ್ಟಕ್ಕೇ ಬಿಟ್ಟುಕೊಟ್ಟು ಜೀವನೋಪಾಯವನ್ನು ಕೈಕೊಳ್ಳಬೇಕಾಯಿತು. ಅಜ್ಜಂದಿರ ಆಸ್ತಿಯಲ್ಲೇನಾದರೂ ಸಿಗಬಹುದೆಂದು ಬಯಸಿ ರಾಯರು ಕಾಲುನಡಿಗೆಯಿಂದ ಪುಣೆಯಿಂದ ರೊದ್ದಗ್ರಾಮಕ್ಕೆ ಹೋಗಿ ನೋಡುತ್ತಾರೆ, ಹತ್ತಿಪ್ಪತ್ತು ರೂಪಾಯಿ ಬೆಲೆಬಾಳುವ ಒಡಕು ಪಾತ್ರೆಗಳು ಮಾತ್ರ ಅವರ ಪಾಲಿಗೆ ಬಂದಿದ್ದವು. ಅವುಗಳನ್ನು ಅಲ್ಲಿಂದಲ್ಲಿಯೇ ದಾನಮಾಡಿ ಬಂದ ಹಾದೀ

ಡಿದು ಮರಳಿ ಧಾರವಾಡಕ್ಕೆ ಬಂದು ೧೮೭೨ನೇ ಇಸವಿಯ ಜೂನ ತಿಂಗಳಲ್ಲಿ ಧಾರವಾಡ ಹಾಯಸ್ಕೂಲಿನಲ್ಲಿ ೩೦ ರೂಪಾಯಿ ಸಂಬಳದ ಮೇಲೆ ಬದಲೀ ಅಸಿಸ್ಟಂಟ ಮಾಸ್ತರರಾದರು. ಆಮೇಲೆ ರೆವ್ಹಿನ್ಯೂಖಾತೆಯಲ್ಲಿ ಮೂರು ತಿಂಗಳ ಕೆಲಸಮಾಡಿದರು. ಆ ಕೆಲಸವು ಸರಿದೋರದೆ ಅಲ್ಲಿ ಕೆಲವು ದಿವಸ ಕೆಲಸಮಾಡಿದ ಮೇಲೆ ಪುನಃ ಕಾರವಾರ ಹಾಯಸ್ಕೂಲಿಗೆ ೪೫ ರೂಪಾಯಿ ಸಂಬಳದ ಮೇಲೆ ಕಾಯಮ ಆಗಿ ಹೋದರು. ಅಲ್ಲಿಂದ ೬೦ ರೂಪಾಯಿ ಸಂಬಳವಾಗಿ ಸವಣೂರ ಇಂಗ್ಲಿಷ ಶಾಲೆಯ ಹೆಡ್‌ಮಾಸ್ತರರಾದರು. ಮುಂದೆ ಆರುತಿಂಗಳಲ್ಲಿ ಪುನಃ ಧಾರವಾಡ ಹಾಯಸ್ಕೂಲಿಗೆ ಅದೇ ಸಂಬಳದ ಮೇಲೆ ವರ್ಗಾಯಿತು. ಬಳಿಕ ೧೮೭೬ನೇ ಇಸವಿಯಲ್ಲಿ ಧಾರವಾಡ ಜಿಲ್ಹೆಯ ಅಸಿಸ್ಟಂಟ ಡೆ. ಎ. ಇ. ರಾಗಿ ನಿಯಮಿಸಲ್ಪಟ್ಟರು. ನಾಲ್ಕು ವರ್ಷ ಒಳ್ಳೇ ಉತ್ಸಾಹದಿಂದ ಕೆಲಸಮಾಡಿದ ಮೇಲೆ ೧೮೮೦ನೇ ಇಸವಿಯ ಸಪ್ಟಂಬರ ತಿಂಗಳಲ್ಲಿ ರಾ. ಸಾ. ಚನಬಸಪ್ಪನವರು ಕೈಲಾಸವಾಸಿಗಳಾಗಲು ಅವರ ಸ್ಥಳದ ಮೇಲೆ ಶ್ರೀನಿವಾಸರಾಯರ ಬದಲೀ ನೇಮಣೂಕು ಆಗಿ ಮುಂದೆ ಜಾನೇವಾರೀ ತಿಂಗಳಲ್ಲಿ ಅವರು ಕಾಯಮ ಡೆಪ್ಯೂಟ ಎಜ್ಯೂಕೇಶನಲ್ ಇನಸ್ಪೆಕ್ಟರರಾದರು. ಆಗ ಈ ಸ್ಥಳದ ಸಂಬಳವು ೧೫೦ ರೂಪಾಯಿ ಇತ್ತು. ಶ್ರೀನಿವಾಸರಾಯರ ನೇಮಣೂಕು ಆದಾಗ ಇಡೀ ಜಿಲ್ಹೆಯಲ್ಲಿ ೧೬೭ ಶಾಲೆಗಳಿದ್ದವು. ಈ ಕೆಲಸವನ್ನು ಅವರು ಒಂದೇಸವನೆ ದಕ್ಷತೆಯಿಂದ ೨೦ ವರ್ಷಗಳ ವರೆಗೆ ಮಾಡಿದರು. ಈ ಅವಧಿಯ ಅವರ ಆಡಳಿತದಲ್ಲಿ ಇಡೀ ಜಿಲ್ಹೆಯೊಳಗೆ ೬೧೩ ಶಾಲೆಗಳಾದವು. ಬುದ್ಧಿವಂತರೂ ಕರ್ತವ್ಯದಕ್ಷರೂ ಆದ ಶಿಕ್ಷಕರಿಗೆ ಯೋಗ್ಯ ಪ್ರೋತ್ಸಾಹನವು ದೊರೆತು ಶಾಲೆಗಳ ಸ್ಥಿತಿಯು ಸುಧಾರಿಸಿತು. ದಕ್ಷಿಣಭಾಗದ ಉಳಿದ ಜಿಲ್ಹೆಗಳಗಿಂತ ಧಾರವಾಡದ ವಿದ್ಯಾಭ್ಯಾಸದ ಸ್ಥಿತಿಯು ಉತ್ತಮತರದ್ದಾಗಿತ್ತೆಂದು ಆಕಾಲದ ವರಿಷ್ಠ ಅಧಿಕಾರಿಗಳು ಬರೆದಿಟ್ಟ ಅಭಿಪ್ರಾಯಗಳಿಂದಲೂ ಮುಲಕೀ ಪರೀಕ್ಷೆಯ ಉಮೇದವಾರರ ಸಂಖ್ಯೆಯಿಂದಲೂ ವ್ಯಕ್ತವಾಗುತ್ತದೆ. ಈ ಬಗೆಯಾಗಿ ರಾಯರು ಘನತೆಗೇರುತ್ತ ನಡೆದಂತೆ ಇತ್ತ ಇದೇ ಅವಧಿಯಲ್ಲಿ ಅವರಿಗೆ ಪ್ರಾಪಂಚಿಕ ಕಷ್ಟಗಳು ಅನೇಕ ಸಂಭವಿಸಿದವು. ಹತ್ತೆಂಟು ಸಂತತಿಗಳೆಲ್ಲ ಬಾಲ್ಯದಲ್ಲಿಯೇ ತೀರಿದವು. ಮಗನೊಬ್ಬನು ೯-೧೦ ವರ್ಷದವನಾಗಿ ಗತಿಸಿದನು. ಮಕ್ಕಳು ಬದುಕದಂತಾಗಲು, ರಾಯರು ಮತ್ತೊಂದು ಲಗ್ನವಾದರು. ಮುಂದೆ ಅಲ್ಪ ಕಾಲದಲ್ಲಿಯೇ ಅವರ ಮೊದಲನೆಯ ಸಹಧರ್ಮಿಣಿಯವರು ಪರಲೋಕವನ್ನೈದಿದರು. ಆದರೂ ಪ್ರಪಂಚದ ದುಃಖಗಳಿಗೆ ಎದೆಗೊಡದೆ ರಾಯರು ಕರ್ತವ್ಯಪರಾಙ್ಮುಖರಾಗದೆ ತಮ್ಮ ಕೆಲಸವನ್ನು ಮಾಡಹತ್ತಿದರು. ಇದೇ ಮಹನೀಯರ ಲಕ್ಷಣವು.

ಮುಂದೆ ೧೮೯೯ನೆಯ ಇಸವಿಯಲ್ಲಿ ಶ್ರೀನಿವಾಸರಾಯರು ಧಾರವಾಡ ಟ್ರೇನಿಂಗ ಕಾಲೇಜದ ಬದಲೀ ಪ್ರಿನ್ಸಿಪಾಲರಾದರು. ೯ ತಿಂಗಳು ಕೆಲಸಮಾಡಿದ ಮೇಲೆ ಆ ಸ್ಥಳವು ಅವರಿಗೆ ಕಾಯಮ ಆಯಿತು. ಇವರ ಆಡಳಿತವು ಹೋದ ನವಂಬರ ತಿಂಗಳ ಶಾಲಾಪತ್ರಕದಲ್ಲಿ ಯಥಾಯೋಗ್ಯವಾಗಿ ಉಲ್ಲೇಖ ಹೊಂದಿದ್ದು, ಅದನ್ನೇ ನಮ್ಮ ವಾಚಕರಿಗಾಗಿ ಇದರಡಿ ಕೊಡುತ್ತೇವೆ:—

“ ರೊದ್ದರಾಯರು ತಮ್ಮ ಅಪರಿಮಿತವಾದ ಉತ್ಸಾಹವನ್ನೂ ಶಿಕ್ಷಕರ ವಿಷಯಾ... ಪೂರ್ಣಜ್ಞಾನವನ್ನೂ ಅವಿಚ್ಛಿನ್ನವಾಗಿ ೨೦ ವರ್ಷ ಡೆ. ಎ. ಇ. ರಾಗಿದ್ದಾಗ ದೊರೆತ ಬಹುವಿಧದ ಅನುಭವವನ್ನೂ ಟ್ರೇನಿಂಗ ಕಾಲೇಜದ ಉತ್ಕರ್ಷಕ್ಕಾಗಿ ಚನ್ನಾಗಿ ಉಪಯೋಗಿಸಿದರೆಂಬದು ನಿರ್ವಿವಾದವಾದ ಸಂಗತಿಯು. ಅವರ ಕಾಲದಲ್ಲಿ ಕಾಲೇಜದ ವಿದ್ಯಾರ್ಥಿಗಳ ಸಂಖ್ಯೆಯು ೧೦೬ ರಿಂದ ೨೪೭ರ ವರೆಗೆ ಏರಿದ್ದಲ್ಲದೆ ರಿಟ್ರೇನಿಂಗ ವರ್ಗದಲ್ಲಿ ೪೬ ಜನ ಹಳೆ ಶಿಕ್ಷಕರಿದ್ದರು. ಇವರು ೧೯೦೨ ರಲ್ಲಿ ೧೦೦ ಹುಡುಗರನ್ನು ಪುಣೆ, ಮುಂಬಯಿ, ಬಡೋದೆಗಳಿಗೆ ಕರಕೊಂಡು ಹೋಗಿ, ಅವರಿಗೆ ಅಲ್ಲಿಯ ವಿದ್ಯಾಸಂಸ್ಥೆಗಳನ್ನೂ ನೋಡತಕ್ಕ ಸ್ಥಳಗಳನ್ನೂ ತೋರಿಸಿಕೊಂಡು ಬಂದರು. ಮರುವರ್ಷದ ಪ್ರವಾಸದಲ್ಲಿ ಸುಮಾರು ಒಂದುನೂರಾ ಅರವತ್ತು ವಿದ್ಯಾರ್ಥಿಗಳನ್ನು ಮೈಸೂರು, ಬೆಂಗಳೂರು ಕೋಲಾರದ ಬಂಗಾರದ ಕಣಿ, ಪ್ರಾಚೀನ ರಾಜಧಾನಿಯಾದ ವಿಜಯನಗರ ಮುಂತಾದ ಸ್ಥಳಗಳಿಗೆ ಕರಕೊಂಡು ಹೋಗಿದ್ದರು.

“ ಇವರ ಕಾಲದಲ್ಲಿಯೇ ರಿಟ್ರೇನಿಂಗ ವರ್ಗವು ಪುಣೆ ಅಹಮ್ಮದಾಬಾದಗಳಲ್ಲಿ ಆಗುವದಕ್ಕಿಂತ ಮುಂಚಿತವಾಗಿ ಇಲ್ಲಿ ಪ್ರಾರಂಭವಾಯಿತು. ಶಿಕ್ಷಣದಲ್ಲಿ ಕಿಂಡರಗಾರ್ಟನ್, ವಸ್ತುಪಾಠ ಮುಂತಾದ ಹೊಸ ಪದ್ಧತಿಗಳನ್ನು ತೋರಿಸುವದರ ಸಲುವಾಗಿ ಪ್ರತಿವರ್ಷ ೫೦ ಜನ ಅನುಭವಿಕ ಶಿಕ್ಷಕರನ್ನು ಕರೆಯಿಸಿ ಅವರಿಗೆ ಈ ಪದ್ಧತಿಗಳ ಜ್ಞಾನವನ್ನೂ ಮಾನಸಶಾಸ್ತ್ರದ ತಿಳುವಳಿಕೆಯನ್ನೂ ಮಾಡಿಕೊಡಹತ್ತಿದರು. ಈ ವರ್ಗಕ್ಕೆ ಅವಶ್ಯವಾದ ಕಟ್ಟಡಗಳನ್ನು ೬೦ ಸಾವಿರ ರೂಪಾಯಿ ವೆಚ್ಚ ಮಾಡಿ ಕಟ್ಟಿಸಿದರು; ಮತ್ತು ಅ. ಡೆಪ್ಯೂಟಿ ಎ. ಇ. ಜನರಿಗೆ ಈ ಹೊಸ ಪದ್ಧತಿಗಳ ಜ್ಞಾನವನ್ನು ಮಾಡಿಕೊಡಲಿಕ್ಕೆ ೧ ತಿಂಗಳ ಮಟ್ಟಿಗೆ ಟ್ರೇ. ಕಾ. ಕ್ಕೆ ಕಳುಹಿಸುವ ಪರಿಪಾಠವೂ ಇವರ ಕಾಲದಲ್ಲಿಯೇ ಪ್ರಚಾರದಲ್ಲಿ ಬಂದಿತು.

“ ರೊದ್ದರಾಯರು ೮ ವರ್ಷಕ್ಕಿಂತ ಹೆಚ್ಚು ಕಾಲ ತಮ್ಮ ಕೆಲಸವನ್ನು ಜನಪ್ರಿಯವಾಗುವಂತೆ ವೈಭವದಿಂದ ಜರುಗಿಸಿ ೧೯೦೮ ರಲ್ಲಿ ಕೆಲಸದಿಂದ ನಿವೃತ್ತರಾದರು. ಅವರ ಅತ್ಯುತ್ತಮ ಕೆಲಸದ ಪ್ರತಿಫಲವಾಗಿ ಸರಕಾರದವರು ಇವರಿಗೆ ರಾವಬಹಾದ್ದೂರ ಪದವಿಯನ್ನು ದಯಪಾಲಿಸಿದರು.

“ ಹಳ್ಳಿಯೊಳಗಿನ ವಿದ್ಯಾರ್ಥಿಗಳಿಗೆ ಕೃಷಿಕರ್ಮದ ಉಪಯೋಗವಾಗಬೇಕೆಂತಲೂ ಎಲ್ಲ ವಿದ್ಯಾರ್ಥಿಗಳಿಗೆ ಪ್ರಕೃತಿವಿಮರ್ಶೆಯ ಮಹತ್ವವು ತಿಳಿಯಬೇಕೆಂತಲೂ ಸರಕಾರದವರಿಗೆ ಕಂಡುಬಂದದರಿಂದ ೧೯೦೪ ರಲ್ಲಿ ಕಾಲೇಜದ ಅಭ್ಯಾಸಪತ್ರಿಕೆಯಲ್ಲಿ ಕೃಷಿಕರ್ಮವೆಂಬ ಹೊಸ ವಿಷಯವು ಸೇರಿಸಲ್ಪಟ್ಟು ಅದನ್ನು ಕಲಿಸುವದಕ್ಕೆ ಒಬ್ಬ ಶಿಕ್ಷಕನನ್ನು ನೇಮಿಸಿದರು. ವಿದ್ಯಾರ್ಥಿಗಳಿಂದ ಕೃಷಿಯ ಕೆಲಸ ಮಾಡಿಸುವದಕ್ಕಾಗಿ ಕಾಲೇಜಕ್ಕೆ ಸಮೀಪವಾಗಿ ಒಂದು ಹೊಲವನ್ನು ಕೊಂಡುಕೊಂಡರು. ಹತ್ತುವರ್ಷಗಳವರೆಗೆ ಕೃಷಿಕರ್ಮದ ಅನುಭವವನ್ನು ಕಂಡುಕೊಂಡ ಮೇಲೆ ಅದು ಕಷ್ಟಾಗಿ ಅದರ ಸ್ಥಳದಲ್ಲಿ ಶಾಲೆಯ ತೋಟ ಮತ್ತು ಪ್ರಕೃತಿವಿಮರ್ಶೆ ಎಂಬ ಎರಡು ವಿಷಯಗಳು ನೆಲೆಗೊಂಡವು.

"೧೯೦೫ ಕ್ಕಿಂತ ಮೊದಲು ಕಾಲೇಜದೊಳಗೆ ಗಾಯನ ಶಿಕ್ಷಣವು ದೊರೆಯತಕ್ಕದ್ದೆಂಬ ಬಗ್ಗೆ ಹಲವು ಸಾರೆ ಪ್ರಯತ್ನಗಳಾಗಿದ್ದರೂ ನಿಶ್ಚಿತವಾದ ಶಿಕ್ಷಣವನ್ನು ಪ್ರಾರಂಭಿಸುವದು ಸಾಧ್ಯವಾಗಿದ್ದಿಲ್ಲ. ಆದರೆ ಗಾಯನಪ್ರಿಯರಾದ ಮಿ. ಸಹಸ್ರಬುದ್ಧೆ ಇವರ ಕಾಲದಲ್ಲಿ ಈ ವಿಷಯವು ಅಗತ್ಯ ತೋರಿದ್ದರಿಂದ ಒಬ್ಬ ಗಾಯನ ಶಿಕ್ಷಕನನ್ನು ನೇಮಿಸಿದರು. ಮತ್ತು ಗಾಯನವು ಮುಂದೆ ಐಚ್ಛಿಕ ವಿಷಯವಾಯಿತು.

"೧೯೦೮-೧೦ರಲ್ಲಿ ಟ್ರೇ. ಕಾ. ದ ಕಾಯದೆಯಲ್ಲಿ ತಿದ್ದುಪಡೆಯಾಯಿತು. ೧೯೦೮ ನೆಯ ಇಸವಿಯ ಕಾಯದೆಯಿಂದ ಮೂರು ಪ್ರಕಾರದ ವಿ. ವೇತನಗಳು ಕ್ರಮವಾಗಿ ೭, ೭, ೮ ರೂ. ಗಳವೆಂದು ಗೊತ್ತಾಯಿತು. ಮತ್ತು ಹೆಣ್ಣುಮಕ್ಕಳ ಟ್ರೇ. ಕಾ. ದಲ್ಲಿ ಕಲಿಯಲಿಕ್ಕೆ ತಮ್ಮ ಹೆಂಡಂದಿರನ್ನು ಕಳುಹಿಸಿದ ವಿದ್ಯಾರ್ಥಿಗಳಿಗೆ ೩ ರೂ. ಅಲೌನ್ಸು ಕೊಡಬೇಕೆಂತಲೂ ನಿರ್ಣಯವಾಯಿತು. ಮುಸಲ್ಮಾನ, ಭಿಲ್ಲ ಮುಂತಾದ ಹಿಂದುಳಿದ ಜಾತಿಯವರಿಗಾಗಿ ಕೆಲವು ವೇತನಗಳು ಕಾದಿಡಲ್ಪಟ್ಟವು. ಮೊದಲನೆಯ ವರ್ಷದ ಆರಂಭದ ಸಂಬಳವು ೧೦ ರೂಪಾಯಿಯಾಯಿತು." ಇತ್ಯಾದಿ.

ಈ ಮೇರೆಗೆ ಎಂಟು ವರ್ಷಗಳವರೆಗೆ ಟ್ರೇನಿಂಗಕಾಲೇಜದಲ್ಲಿ ಹೊಸ ಹೊಸ ತಿದ್ದುಪಡೆಗಳನ್ನು ಮಾಡಿ, ವಿದ್ಯಾರ್ಥಿಗಳ ಸಂಖ್ಯೆಯನ್ನು ದಿನೇ ದಿನೇ ವೃದ್ಧಿಗೊಳಿಸಿ ವಿದ್ಯಾರ್ಥಿಗಳಿಗೆ ಯೋಗ್ಯ ಉತ್ತೇಜನವನ್ನಿತ್ತು, ಶಿಕ್ಷಣದಂಥ ಪವಿತ್ರ ಕಾರ್ಯವು ಇನ್ನೊಂದಿಲ್ಲವೆಂಬ ತತ್ವವನ್ನು ಶಿಕ್ಷಕರ ಮೇಲೆ ಬಿಂಬಿಸಿ, ಶಿಕ್ಷಕರ ಸನ್ಮಾನಕ್ಕೂ ಜನತೆಯ ಆದರಕ್ಕೂ ಸರಕಾರದ ಪ್ರೀತಿಗೂ ಪಾತ್ರರಾಗಿ, ಶ್ರೀನಿವಾಸರಾಯರು ೧೯೦೮ನೇ ಜುಲೈ ತಿಂಗಳು ೧ನೇ ತಾರೀಖಿನ ದಿವಸ ಸರಕಾರದ ಕೆಲಸದಿಂದ ನಿವೃತ್ತರಾದರು. ೧೮೯೫ ರಲ್ಲಿ ತಾವೇ ಪ್ರಾರಂಭಿಸಿದ ಹೆಣ್ಣು ಮಕ್ಕಳ ಶಾಲೆಯು ಮುಂದೆ ಕಾಲೇಜಾಗಿ ಅದಕ್ಕಾಗಿ ಸ್ವತಂತ್ರ ಇಮಾರತು ಪೂರ್ಣವಾಗುವವರೆಗೆಂದು ರಾಯರಿಗೆ ೧ ವರ್ಷದ ನವಕರಿಯ ಅವಧಿಯನ್ನು ಹೆಚ್ಚಿಸುವದರಲ್ಲಿ ಬಂದಿತ್ತು. ಈ ಒಳಗಾಗಿ ಮೂರು ತಿಂಗಳುಗಳ ವರೆಗೆ ಎಜ್ಯುಕೇಶನಲ್ ಇನ್‌ಸ್ಪೆಕ್ಟರರ ಹುದ್ದೆಯಾದರೂ ರಾಯರಿಗೆ ಒಂದು ಸಾರೆ ಲಭಿಸಿತ್ತು. ಅದಿರಲಿ, ರಾಯರ ಕೆಲಸದಿಂದ ಪರಮ ತುಷ್ಟರಾದ ಸರಕಾರದವರು ಅವರ ಪಾತ್ರತೆಗೆ ತಕ್ಕಂತೆ "ರಾವಬಹಾದ್ದೂರ" ಪದವಿಯನ್ನು ಈ ಸಂದರ್ಭದಲ್ಲಿಯೇ ದಯಪಾಲಿಸಿದರು. ಇವರ ವಿದ್ಯಾರ್ಥಿಗಳಾದರೂ ಇವರ ಹೆಸರನ್ನು ಚಿರಸ್ಮರಣೀಯವಾಗಿ ಭಜಿಸುತ್ತಿದ್ದರು. ವಿದ್ಯಾರ್ಥಿಗಳಲ್ಲಿ ಇವರಿಗಿದ್ದ ಪ್ರೇಮವು ಅಂತಃಕರಣಜನ್ಯವಾದದ್ದಿತ್ತೆಂದು ಎಲ್ಲರ ಕೇಳಿಕೆಯಲ್ಲುಂಟು. ಆ ಕಾಲದ ಇವರ ಶಿಷ್ಯರಾದ ಬೇರೆ ಜಾತಿಯ ಶಿಕ್ಷಕರೊಬ್ಬರು ಗುರುಭಕ್ತಿಯ ಕುರುಹೆಂದು ತಮ್ಮ ಮಗನಿಗೆ "ಶ್ರೀನಿವಾಸ" ನೆಂದು ರಾಯರ ಹೆಸರನ್ನಿಟ್ಟಿದ್ದರೆಂದು ಕೇಳಬಲ್ಲೆವು!

ರಾಜಸೇವೆಯಿಂದ ನಿವೃತ್ತರಾದಮೇಲೆ ಉಳಿದ ಅನೇಕ ನಿವೃತ್ತ ಅಧಿಕಾರಿಗಳಂತೆ ಸರಕಾರದ ಉಂಬಳಿಯನ್ನು ತಕ್ಕೊಂಡು ಮನೆಹಿಡಿದು ಕೂಡ್ರುವದಂತೂ ಶ್ರೀನಿವಾಸ

ರಾಯರಂತಹ ಲೋಕಹಿತಕ[illegible]ಬದು ಸಹಜವೇ ಸರಿ. [illegible] ಸೇವೆಯಲ್ಲಿದ್ದಾಗಿನ ಉತ್ಸಾಹದ ಇಮ್ಮಡಿ ಮುಮ್ಮಡಿ ಉತ್ಸಾಹವು ರಾಯರಲ್ಲಿ ಒಂದು ಜಿಟ್ಟಿತೇನೋ ಎಂಬಂತೆ ರಾಯರ ಈಚೆಗಿನ ಆಯುಷ್ಯಕ್ರಮಣದಿಂದ ಕಂಡುಬರುವದು. ಸರಕಾರದ ಸೇವೆಯಲ್ಲಿ ಜೀವವು ಮುಪ್ಪಾಯಿತು; ಇನ್ನಾದರೂ ಮಕ್ಕಳು ಮೊಮ್ಮಕ್ಕಳೊಡನೆ ಸುಖದಿಂದ ತಿಂದುಟ್ಟು ಕಾಲಕಳೆಯೋಣ; ಹೆಚ್ಚಿನ ಹವ್ಯಾಸದಿಂದೇನು ಫಲವೆಂಬೀತರದ ವಿಚಾರಗಳು ರಾಯರಲ್ಲಿ ಉದ್ಭವಿಸಲೇ ಇಲ್ಲ. ಲೋಕಕಲ್ಯಾಣವೇ **ಮಾನವೀ ಜೀವಿತದ ಗುಟ್ಟೆಂ**ದೂ ಲೋಕಕಲ್ಯಾಣಕ್ಕಾಗಿ ಹೆಣಗುವದೇ ಆದ್ಯಕರ್ತವ್ಯವೆಂದೂ ಬಗೆಯುತ್ತಿದ್ದ ರಾಯರು **ಸರಕಾರ ಸೇವೆ**ಯಂತಹ ಒಂದು ಬಗೆಯ ಅಧೀನವೃತ್ತಿಯಲ್ಲಿಯೇ ಪರಿಪರಿಯಿಂದ ಲೋಕಹಿತವನ್ನು ಸಾಧಿಸಲು ಸಮರ್ಥರಾದಂತೆ ಸರಕಾರ ಸೇವೆಯ ಪಾಶವು ಹರಿಯುತ್ತಲೇ ಲೋಕಹಿತವನ್ನೇ ಇನ್ನೂ ಹಲವು ತರದಿಂದ ಕಟ್ಟಿಕೊಳ್ಳೋಣವೆಂದು ಟೊಂಕಕಟ್ಟಿ ನಿಂತರು. ಸತತ ಕಾರ್ಯದಲ್ಲಿ ಆಸಕ್ತರೂ ವ್ಯಗ್ರರೂ ಆಗಿರುವದೇ ಮಾನವೀ ಧರ್ಮವೆಂಬ ತತ್ವವನ್ನರಿತು ಅದರಂತೆ ಆಚರಿಸುವಂತಹ ಮಹನೀಯರಿಗೆ ಅಸಾಧ್ಯವಾವುದೂ ಇರುವದಿಲ್ಲ. ಪರಣತವಯಸ್ಸೇ ಮೊದಲಾದ ವಿಚಾರಗಳು ಅವರನ್ನು ಕರ್ತವ್ಯದ ಮಾರ್ಗದಲ್ಲಿ ಎಂದೂ ಪ್ರತಿಬಂಧಿಸುವದಿಲ್ಲ. ಕಾರ್ಯಬಾಹುಲ್ಯದಿಂದಲೂ ಕಾರ್ಯಗಳ ಸಾಫಲ್ಯದಿಂದಲೂ ಅವರಲ್ಲಿದ್ದ ಕ್ರಿಯಾಶಕ್ತಿಯು ದ್ವಿಗುಣಿತವಾಗುವದಲ್ಲದೆ ಉತ್ಸಾಹವೂ ಲೋಕಹಿತವಾಸನೆಯೂ ಸಂವರ್ಧಿತವಾಗುತ್ತ ನಡೆಯುವವು. ಈ ಮಾತಿನ ತಥ್ಯಾಂಶವು ನಾವು ಮುಂದೆ ಬರೆದಿದ್ದರಿಂದ ಕಂಡುಬರುವದು.

ಶ್ರೀನಿವಾಸರಾಯರು ನಿವೃತ್ತರಾಗುವ ಕಾಲಕ್ಕೆ "ರಾವಬಹಾದ್ದೂರ" ಎಂಬ ಬಿರುದನ್ನು ಸರಕಾರದಿಂದ ಪಡೆದು ಸರಕಾರದ ವಿಶಿಷ್ಟ ಸನ್ಮಾನಕ್ಕೆ ಪಾತ್ರರಾಗಿದ್ದಂತೆ ಲೋಕಶಿಕ್ಷಣಕಾರ್ಯದಲ್ಲಿ ಬಹುಕಾಲದ ವರೆಗೆ ಜನರಿಗೆಲ್ಲ ಬಹಳ ಉಪಕಾರ ಮಾಡಿ ಜನರ ಆದರವನ್ನೂ ಮನ್ನಣೆಯನ್ನೂ ಗಳಿಸಿಕೊಂಡಿದ್ದರು. ನಿವೃತ್ತರಾಗುತ್ತಲೇ ಲೋಕಹಿತವನ್ನು ಇನ್ನೂ ಹೆಚ್ಚೆಚ್ಚು ಸಾಧಿಸಿಕೊಳ್ಳಲೇಬೇಕೆಂದು ಅವರು ದೃಢನಿಶ್ಚಯ ಮಾಡಿದರು. ಆದಕ್ಕಾಗಿ ಮ್ಯುನಿಸಿಪಾಲಿಟಿ ಹಾಗೂ ಲೋಕಲಬೋರ್ಡುಗಳಂಥ ಸ್ಥಾನಿಕ ಸ್ವರಾಜ್ಯದ ಮೆಟ್ಟಿಗಳ ಮಾರ್ಗವಾಗಿ ಜನರ ಹಿತವನ್ನು ಮಾಡಲು ಅವರು ಉದ್ಯುಕ್ತರಾದರು. ಧಾರವಾಡದ ಮ್ಯುನಿಸಿಪಾಲಿಟಿಯಲ್ಲಿ ಅವರು ಇದಕ್ಕೂ ಮೊದಲೇ ಸದಸ್ಯರಾಗಿದ್ದರಲ್ಲದೆ ಅಲ್ಲಿಯ ಆಡಳಿತವನ್ನು ಪೂರಾ ಅರಿತವರಾಗಿದ್ದರು. ಹೀಗಾಗಿ, ಅವರಿಗೆ ಇನ್ನು ಮುಂದೆ ಈ ಸಂಸ್ಥೆಯಲ್ಲಿ ಹೆಚ್ಚಿನ ಲಕ್ಷವನ್ನು ಪೂರೈಸಲಿಕ್ಕಾಯಿತು. ಇದೇ ಸಮಯಕ್ಕೆ ಹಿಂದುಸ್ಥಾನದಲ್ಲಿ ಮೋರ್ಲೆ-ಮಿಂಟೋ ಸುಧಾರಣೆಗಳು ಅಮಲಿನಲ್ಲಿ ಬರಲು ಮುಂಬಯಿ ಇಲಾಖೆಯ ದಕ್ಷಿಣಭಾಗದ ಲೋಕಲ್‌ಬೋರ್ಡುಗಳಿಂದ ಮುಂಬಯಿ **ಕಾಯದೆಮಂಡಲಕ್ಕೆ** ಒಬ್ಬ ಮೆಂಬರರನ್ನು ಆರಿಸಿಕೊಡುವ ಅಧಿಕಾರವು ಪ್ರಾಪ್ತವಾ

...ಲು ೬ ಗ್ರಾಲೀಡರ್ಗಗಳ ವತಿಯಿಂದ [illegible] ಕೊಡ್ಡರವರು ಕಾಯಿದೆಮಂಡಲದ ಸದಸ್ಯರಾದರು. ಈ ತರದ ಮಾನವನ್ನು ಹೊಂದಿದ ಧಾರವಾಡಸ್ಥರೆಂದರೆ ಇವರೇ ಮೊದಲನೆಯವರು. ಈ ಮಾನವನ್ನು ಅವರು ೧೯೧೫ನೇ ಇಸವಿಯ ಕೊನೆಯ ವರೆಗೆ ಅನುಭೋಗಿಸಿದರು. ಅತ್ತ ಕಾಯದೆಮಂಡಲದ ಸದಸ್ಯರಾಗಿದ್ದ ಅವಧಿಯಲ್ಲಿಯೇ ಧಾರವಾಡ ಮ್ಯುನಿಸಿಪಾಲಿಟಿಯ ಅಧ್ಯಕ್ಷಸ್ಥಾನಕ್ಕೆ ಬಿನ್ ಅಧಿಕಾರಿಗಳ ಯೋಜನೆಯಾಗುವಂತೆ ಕಾಯದೆಯಾಗಲು, ಆ ಅಧಿಕಾರವೂ ಮೊದಲನೆಯ ಸಾರೆ ನಾಮದಾರ ರಾವ ಬಹಾದ್ದೂರರವರ ಕೊರಳಲ್ಲಿಯೇ ಬಿತ್ತು. ಮ್ಯುನಿಸಿಪಾಲಿಟಿಯಲ್ಲಿ ಇವರ ಆಡಳಿತವು ಉತ್ತಮತರದ್ದಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಇದೇ ಕಾಲದಲ್ಲಿಯೇ ನಾಮದಾರರು ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯದಲ್ಲಿ ವಿಶೇಷ ಜಾಗೃತೆಯನ್ನುಂಟು ಮಾಡಿದರು. ಸಂಘದ ಪ್ರಾರಂಭದಿಂದ ಅದರ ಮೆಂಬರರಾಗಿ ಅದರ ಬೆಳವಣಿಗೆಯಲ್ಲಿ ಬಹಳ ಆಸ್ಥೆಯನ್ನು ತೋರಿಸಿದಂಥ ಈ ಶಿಕ್ಷಣಖಾತೆಯ ಮುಂದಾಳುಗಳು ಸರಕಾರದಿಂದಲೂ ಜನತೆಯಿಂದಲೂ ಪ್ರತಿಷ್ಠೆಯನ್ನು ಪಡೆದ ಕಾಲದಲ್ಲಿ ಸಂಘವನ್ನು ಮರೆಯಲಿಲ್ಲ. ಸಂಘವಾದರೂ ಅವರನ್ನು ಉಪಾಧ್ಯಕ್ಷರನ್ನು ಮಾಡಿ ಗೌರವಿಸದೆ ಇರಲಿಲ್ಲ. ಆ ಕಾಲದ ಅಧ್ಯಕ್ಷರಾದ ಮ. ರಾ. ರಾ. ಗುರುನಾಥರಾವ ಘಾಟಕರವರೂ ಉಪಾಧ್ಯಕ್ಷರಾದ ನಾಮದಾರ ರಾ. ಬ. ಶ್ರೀನಿವಾಸರಾಯರೂ ಸ. ಕಾರ್ಯದರ್ಶಿಗಳಾದ ಕರಗುದರಿ ನಾರಾಯಣರಾಯರೂ ಈ ಮೂವರ ಪ್ರಯತ್ನದಿಂದಲೇ ಸಂಘವು "ಚಾಮರಾಜ ಮಂದಿರ" ವೆಂಬ ಕಟ್ಟಡವನ್ನು ಕಂಡದ್ದಾಯಿತು. ಆ ಕಾಲಕ್ಕೆ ನಾಮದಾರ ರಾ. ಬ. ರವರು ಮೈಸೂರಿಗೆ ದಯಪಾಲಿಸಿ ಮೈಸೂರ ಸರಕಾರದ ಮನವೊಲಿಸಿ ಅವರಿಂದ ಸಂಘದ ಕಟ್ಟಡನಿಧಿಗಾಗಿ ಮೂರು ಸಾವಿರದಷ್ಟು ಹಣವನ್ನು ದಾನರೂಪದಿಂದ ಪಡೆದುಕೊಂಡು ಬಂದರು. ಆ ಕಾಲದಲ್ಲಿಯಾಗಲಿ ತತ್ಪೂರ್ವದಲ್ಲಿಯಾಗಲಿ ತದನಂತರವಾಗಲಿ ಕಾಲಕಾಲಕ್ಕೆ ನಾಮದಾರ ರಾ. ಬ. ರವರು ಸಂಘಕ್ಕೆ ಮಾಡಿದ ಹಾಗೂ ಮಾಡುತ್ತಿರುವ ಉಪಕಾರಗಳನ್ನು ಸಂಘವು ಮರೆಯುವಂತಿಲ್ಲ.

ಕಾಯದೆ ಮಂಡಲದಲ್ಲಿದ್ದಾಗ ರಾಯರು ಮನಸು ಹಾಕಿ ಪ್ರಯತ್ನ ಮಾಡಿ ಸಂಸಿದ್ಧಿಯನ್ನು ಪಡೆದ ಮಹತ್ಕಾರ್ಯವೆಂದರೆ ಕರ್ನಾಟಕದ ಕೇಂದ್ರಸ್ಥಾನವಾದ ಧಾರವಾಡ ಪಟ್ಟಣದಲ್ಲಿ "ಕರ್ನಾಟಕ ಕಾಲೇಜ" ವನ್ನು ಸ್ಥಾಪಿಸಿದ್ದೇ ಸರಿ. ಕರ್ನಾಟಕವು ಕಗ್ಗತ್ತಲೆಯಲ್ಲಿರುವದು, ಕರ್ನಾಟಕಕ್ಕೆ ಕಾಲೇಜದ ಅವಶ್ಯಕತೆಯೇನು? ಎಂದು ಬಗೆಯಾಗಿ ಪರಪ್ರಾಂತೀಯರು ಎಡೆಗಣ್ಣು ಮಾಡುತ್ತಿದ್ದ ಆ ಕಾಲದಲ್ಲಿ, ಕಾಲೇಜವು ಧಾರವಾಡಕ್ಕೇಕೆ? ಬೆಳಗಾಂವಿಯಲ್ಲಿರಲಿ, ಎಂದು ಬೆಳಗಾವಿಯವರು ಅಡ ಬಂದ ಆ ಪ್ರಸಂಗದಲ್ಲಿ, ಕಾಲೇಜವು ಬೇಕೇಬೇಕು, ಧಾರವಾಡಕ್ಕೇಬೇಕು, ಆದರೆ ಸರಕಾರದ ಕಾಲೇಜವು ಬೇಡ, ಡೆ. ಎ. ಸೊಸಾಯಟಿಯವರ ಸ್ವಾಧೀನಕ್ಕೆ ಅದನ್ನು ಕೊಡೋಣವೆಂದು ಬಗೆಯಾಗಿ ಕರ್ನಾಟಕಸ್ಥರಾದ ಧಾರವಾಡಸ್ಥರನೇಕರು ಪುನೆ

ಪ್ರಾಂತದ ಮರಾಟಿಗರ ಸಲುವಾಗಿ ಹಣಗಲುದ್ಯುಕ್ತರಾದ ಸಮಯದಲ್ಲಿ ಬೆಳಗಾಂವಿಯಲ್ಲಿಯೇ ಖಾಸಗಿ ಕಾಲೇಜ ತೆಗೆಯಬೇಕೆಂದು ಹಲಕೆಲವರು ಹೋರಾಡಹತ್ತಿದ ಸಂದರ್ಭದಲ್ಲಿ ಕರ್ನಾಟಕಕ್ಕೆ ಕಾಲೇಜವು ಬೇಕೇಬೇಕು, ಧಾರವಾಡದಲ್ಲಿಯೇ ಬೇಕು, ಕರ್ನಾಟಕದ ಪರಿಸ್ಥಿತಿಗನುಸರಿಸಿ ಸರಕಾರದಿಂದ ನಡೆಸಲ್ಪಡುವಂತಹದೇ ಬೇಕು, ಎಂದು ಪ್ರಕಾರದಿಂದ ಕಾಯಿದೆಮಂಡಲದಲ್ಲೂ ಹೊರಗೂ ಪ್ರಯತ್ನಪಟ್ಟು ಸರಕಾರದವರು ಹಾಕಿದ ಕರಾರಗಳಿಂದ ಎರಡು ಲಕ್ಷರೂಪಾಯಿಗಳನ್ನು ಕರ್ನಾಟಕಸ್ಥರಿಂದ ಕೂಡಿಸಿ ಸರಕಾರ ಸ್ವಾಧೀನಮಾಡಿ ಸರಕಾರೀ ಕಾಲೇಜವನ್ನು ಧಾರವಾಡದಲ್ಲಿ ಪ್ರಸ್ಥಾಪಿಸಿ, ಕರ್ನಾಟಕಸ್ಥರ ಕಲ್ಯಾಣವನ್ನು ಕಟ್ಟಿಕೊಂಡ ಕರ್ನಾಟಕದ ಪಂಚಪ್ರಾಣರಾದ ಕರ್ನಾಟಕದ ಮನ್ನಣೆಗೆ ಸದಾಪಾತ್ರರಾದ ವಯೋವೃದ್ಧ ಜ್ಞಾನವೃದ್ಧ ತಪೋವೃದ್ಧರಾದ ನಾಮದಾರ ರಾ. ಬ. ರೊದ್ದ ಶ್ರೀನಿವಾಸರಾಯರಿಗೂ ರಾ. ಬ. ಅರಟಾಳ ರುದ್ರಗೌಡರಿಗೂ ಕರ್ನಾಟಕಸ್ಥರು ಕೃತಜ್ಞರಾಗಿರುವರು ! 

ಧಾರವಾಡ ಜಿಲ್ಹೆಯ ಲೋಕಲಬೋರ್ಡಿಗಿರುವ ರಾ. ಬ. ರೊದ್ದರವರ ಸಂಬಂಧವು ಕಳೆದ ಇಪ್ಪತ್ತೈದು ವರ್ಷಗಳಿಂದುಂಟಾದದ್ದಿರುವದು. ಬಹುಕಾಲ ಮೆಂಬರರೂ ಚೇಅರಮನ್ನರೂ ಆಗಿದ್ದ ರಾ. ಬ. ರವರು ೧೯೧೭ರಲ್ಲಿ ಮೊದಲನೆಯ ಬಿನ್ನ ಅಧಿಕಾರಿ ಅಧ್ಯಕ್ಷರಾದರು. ಅಂದಿನಿಂದ ಇದುವರೆಗೂ ಅವರೇ ಅಧ್ಯಕ್ಷರಿರುವರು. ಇವರ ಆಡಳಿತದಲ್ಲಾದ ಮುಖ್ಯ ಸುಧಾರಣೆಗಳಲ್ಲಿ ಅತಿ ಮಹತ್ವದ ಸುಧಾರಣೆಯೆಂದರೆ ಪಬ್ಲಿಕ್ ವರ್ಕ್ಸ ಖಾತೆಯಿಂದ ಲೋಕಲ್‌ಬೋರ್ಡು ರಸ್ತೆಗಳನ್ನು ಬೋರ್ಡಿನ ವಶಕ್ಕೆ ತಕ್ಕೊಂಡು ಅವುಗಳ ವ್ಯವಸ್ಥೆಯನ್ನು ನೋಡಿಕೊಳ್ಳುವದಕ್ಕಾಗಿ ಬೇರೆಯೊಬ್ಬ ಇಂಜನಿಯರರನ್ನೂ ಅವರಿಗೆ ಸಹಾಯಕರಾದ ಅಮಲದಾರರನ್ನೂ ಬೋರ್ಡಿನ ವತಿಯಿಂದ ನಿಯಮಿಸಿಕೊಂಡದ್ದು. ಹೀಗೆ ಬೋರ್ಡಿನ ವಶದಲ್ಲಿ ತಕ್ಕೊಂಡ ರಸ್ತೆಗಳು ಒಟ್ಟಿಗೆ ಸುಮಾರು ೪೦೦ ಮೈಲಿನಷ್ಟು ಉದ್ದವಿರುವವು. ಅದರಂತೆ ಲೋ. ಬೋ. ಶಾಲೆಗಳಿಗೆ ವಸತಿಗೃಹಗಳನ್ನು ಹೊಸದಾಗಿ ಕಟ್ಟಿಸಿ, ಹಾಗೂ ಧರ್ಮಶಾಲೆಗಳನ್ನೂ ಭಾವಿಗಳನ್ನೂ ಮುಖ್ಯಮುಖ್ಯ ಅವಶ್ಯವಿದ್ದ ಭಾಗಗಳಲ್ಲಿ ಕಟ್ಟಿಸಿ, ಡೆ. ಎ. ಇ. ರಿದ್ದಾಗ ಶಾಲೆಗಳ ಸಂಖ್ಯೆಯನ್ನು ಬೆಳಿಸಿದಂತೆ ಲೋ. ಬೋ. ಅಧ್ಯಕ್ಷರಾಗಿ, ವಸತಿಗೃಹಗಳನ್ನು ಪೂರೈಸಿಕೊಡುತ್ತ ಬಂದು ಕೊನೆಗೆ ಎಲ್ಲ ಕಡೆಯಲ್ಲೂ ಅವಶ್ಯಕ ಪ್ರಾಥಮಿಕ ಶಿಕ್ಷಣವನ್ನು ಲೋ. ಬೋ. ದ್ವಾರಾ ನಡೆಸುವ ಸುಯೋಗವನ್ನು ಪಡೆದ ಭಾಗ್ಯಶಾಲಿಗಳು ರಾಯರಾಗಿರುವರೆಂದು ಹೇಳಿದರೆ ಅತಿಶಯೋಕ್ತಿಯಾಗದು. ಅಧ್ಯಕ್ಷರಿರುವ ಕಾಲದ ಅವರ ಆಡಳಿತವು ಯಾವಾಗಲೂ ಸರಕಾರದ ಆದರಕ್ಕೆ ಪಾತ್ರವಾಗುತ್ತ ಬಂದಿರುವದು. ಸರಕಾರದವರಾದರೂ ಅವರ ಪ್ರಯತ್ನಗಳಿಗೂ ಕರ್ತವ್ಯದಕ್ಷತೆಗೂ ತಲೆದೂಗಿ ೧೯೨೩ನೇ ಇಸವಿಯಲ್ಲಿ ಅವರಿಗೆ ದಿವಾನಬಹಾದ್ದೂರ ಎಂಬ ಪದವಿಯನ್ನೂ ಮರುವರ್ಷ ಸಿ. ಆಯ್. ಇ. ಎಂಬ ಹೆಚ್ಚಿನ ಬಿರುದನ್ನೂ ದಯಪಾಲಿಸಿರುವರು. ಸಿ. ಆಯ್. ಇ. ಪದವಿಯನ್ನು ಪಡೆದ ಕರ್ನಾಟಕಸ್ಥರು ಇವರೇ ಒಬ್ಬರಾಗಿರುವರು.

ಈ ಮೇರೆಗೆ ಬೇರೆ ಬೇರೆ ಪ್ರಮುಖ ಸಂಸ್ಥೆಗಳ ದ್ವಾರದಿಂದ ದಿವಾನಬಹಾದೂರ ರೊದ್ದ ಶ್ರೀನಿವಾಸರಾಯರು ಮಾಡುತ್ತ ಬಂದಿರುವ ಲೋಕಹಿತದ ಉಲ್ಲೇಖವು ತಕ್ಕ ಮಟ್ಟಿಗೆ ಆದಂತಾಯಿತು. ಅದರಂತೆ ಇದೇ ಕಾಲದಲ್ಲಿ ದಿ. ಬ. ರವರು ಡಿಸ್ಟ್ರಿಕ್ಟ ಅಗ್ರಿಕಲ್ಚರಲ್ ಅಸೋಸಿಯೇಶನ್ ಮೊದಲಾದ ಇನ್ನೂ ಹಲವು ಸಂಸ್ಥೆಗಳಲ್ಲಿ ತಮ್ಮ ಅಂಗವನ್ನಿಟ್ಟುಕೊಂಡು ಅವುಗಳ ಮುಖಾಂತರವಾಗಿ ಜನತೆಯ ಹಿತವನ್ನು ಸಾಧಿಸುತ್ತ ಬಂದಿರುವರು. ಅದನ್ನೆಲ್ಲ ಯಥಾವಿಸ್ತಾರವಾಗಿ ವರ್ಣಿಸುವದು ಈ ಚಿಕ್ಕ ಲೇಖದಲ್ಲಿ ಸಾಧ್ಯವಿಲ್ಲ. ಆದರೂ, ೧೯೧೯ ರಲ್ಲಿ ಅವರ ನೇತೃತ್ವದ ಕೆಳಗೆ ಸ್ಥಾಪಿತವಾಗಿ, ಅನೇಕ ಎಡರುಗಳನ್ನು ದಾಟಿ, ಈಗಲೂ ಚನ್ನಾಗಿ ನಡೆಯುತ್ತಿರುವ "ಕರ್ನಾಟಕ ಹಾಯಸ್ಕೂಲ" ಎಂಬ ವಿದ್ಯಾಸಂಸ್ಥೆಯು ಕೇವಲ ಅವರ ವಿದ್ಯಾಭಿರುಚಿಯ, ನಿಷ್ಕಾಮ ಕರ್ಮದ, ಸತತ ಪ್ರಯತ್ನದ, ಲೋಕಹಿತೇಚ್ಛೆಯ ಕುರುಹು ಆಗಿರುವದೆಂದು ನಿರ್ವಿವಾದವಾಗಿ ಹೇಳಬಹುದು. ಹುಟ್ಟುತ್ತಲೇ ಹಿರುಗೆಜ್ಜೆಯನ್ನು ಕಟ್ಟಿ, ಕರ್ನಾಟಕದಲ್ಲೆಲ್ಲ ಪ್ರಸಿದ್ಧಿಯನ್ನು ತಾಳಿ, ಕಾಲವಶದಿಂದ ಅಂತಃಕಲಹವೆಂಬ ಮಹಾರೋಗದಿಂದ ಬಳಲಿ, ಸದ್ಯಕ್ಕೆ ದೇವರ ಅನುಗ್ರಹದಿಂದಲೂ ದಿ. ಬ. ರೊದ್ದರವರ ಪ್ರಯತ್ನಗಳಿಂದಲೂ ತಲೆಯೆತ್ತಲು ಸಮರ್ಥವಾಗಿ ಧಾರವಾಡಸ್ಥ ಬಾಲಕರಿಗೆ ವಿದ್ಯಾಭ್ಯಾಸವನ್ನು ದಯಪಾಲಿಸುತ್ತಲಿರುವ ಈ ಸಂಸ್ಥೆಯ ಸಂಬಂಧವಾಗಿಯೂ ದಿ. ಬ. ರೊದ್ದರವರಿಂದಾದ ಉಪಕೃತಿಗಳ ವಿಷಯವಾಗಿಯೂ ವಿಶದವಾಗಿ ಬರೆಯುವದಾದರೂ ಇಲ್ಲಿ ಪ್ರಸ್ತುತವಾಗಲರಿಯದು.

ರಾಯರು ಈಗ ೭೪ ವರ್ಷದವರಿದ್ದಾಗ್ಯೂ ತರುಣರಂತೆ ಕೈಕೊಂಡ ಕೆಲಸವನ್ನು ಉತ್ಸಾಹದಿಂದಲೂ ದೃಢನಿಶ್ಚಯದಿಂದಲೂ ಮಾಡುತ್ತಿರುವರು. ಇವರ ದೀರ್ಘೋದ್ಯೋಗವನ್ನೂ ಗಟ್ಟಿಗತನವನ್ನೂ ನೋಡಿ ವರಿಷ್ಠ ಅಧಿಕಾರಿಗಳು ಒಮ್ಮೊಮ್ಮೆ ದಂಗುಬಡಿದಂತಾಗಿರುತ್ತಾರೆ. ಹಿಂದಕ್ಕೆ ಮೂವತ್ತು ವರ್ಷಗಳ ಹಿಂದೆ, ರಾಯರು ಡಿಪೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರರಿದ್ದಾಗ ಒಂದೇ ರಾತ್ರಿಯಲ್ಲಿ ತಪ್ಪುತಡೆಗಳಿಲ್ಲದಂತೆ ಮುಲಕೀ ಪರೀಕ್ಷೆಯ ಐದುನೂರು ಅಂಕಗಣಿತದ ಉತ್ತರದ ಪುಸ್ತಕಗಳನ್ನು ಅವರು ಪರೀಕ್ಷಿಸಿ ಕೊಟ್ಟ ಆಖ್ಯಾಯಿಕೆಯು ಎಲ್ಲರಿಗೂ ಗೊತ್ತುಂಟು. ಶಾಲೆಗಳ ಪರೀಕ್ಷೆಯನ್ನಂತೂ ಹಸಿವೆ ನೀರಡಿಕೆಗಳ ಪರಿವೆಯಿಲ್ಲದೆ ಅವರು ಹಗಲೆಲ್ಲ ತಕ್ಕೊಳ್ಳುತ್ತಿದ್ದರೆಂಬದನ್ನೂ ಎಲ್ಲರೂ ಬಲ್ಲರು. ಶ್ರೀನಿವಾಸರಾಯರು ಯಾವದೊಂದು ವಿಶ್ವವಿದ್ಯಾಲಯದ ಪದವೀಧರರಲ್ಲವಿದ್ದರೂ, ತಮ್ಮ ಚುರುಕು ಬುದ್ಧಿಯಿಂದಲೂ, ವಿಲಕ್ಷಣಸ್ಮರಣಶಕ್ತಿಯಿಂದಲೂ ದೀರ್ಘೋದ್ಯೋಗದಿಂದಲೂ ಪದವೀಧರರಿಗಿಂತ ಮಿಗಿಲಾದ ಯೋಗ್ಯತೆಯನ್ನು ಪಡೆದಿದ್ದಾರೆ. ಕನ್ನಡ ಭಾಷಾಜ್ಞಾನವು ರಾಯರಲ್ಲಿ ವಿಶೇಷವಾಗಿ ಕಂಡುಬರುವದು. ಕನ್ನಡಕ್ಕೆ ಅವರಿಂದ ಪರಿವರ್ತಿಸಲ್ಪಟ್ಟ ಮಾರ್ಸಡೆನ್‌ರ ಹಿಂದುಸ್ತಾನದ ಇತಿಹಾಸವು ಬಹು ಸುಲಭವಾಗಿಯೂ ಅಂದವಾಗಿಯೂ ಬರೆಯಲ್ಪಟ್ಟಿದೆ. ರಾಯರು ಹಲವು ಸಾರೆ ಮ್ಯಾಟ್ರಿಕ ಪರೀಕ್ಷೆಯಲ್ಲಿ ಕನ್ನಡದ ಪರೀಕ್ಷಕರಾಗಿದ್ದರು. ಕರ್ನಾಟಕ ಸಾಹಿತ್ಯಸಮ್ಮೇ

ಲನದ ಅಧ್ಯಕ್ಷತೆಯು ಬಹುಮಾನವು ರಾಯರಿಗೆ ೪-೫ ವರ್ಷಗಳ ಹಿಂದೆ ಹೊಸಪೇಟೆಯು ಅಧಿವೇಶನದಲ್ಲಿ ದೊರತಿದೆ. ಸ್ಮರಣಶಕ್ತಿಯಲ್ಲಂತೂ ಈ ಪ್ರಾಂತದಲ್ಲಿ ಇವರನ್ನು ಸರಿಗಟ್ಟುವವರು ಬಹು ವಿರಳ. ಒಂದು ಸಾರೆ ನೋಡಿದರೆ ಸಾಕು, ವರ್ಷಾವಧಿಗಳಾದರೂ ಗುರುತು ಮರೆಯದೆ ಅವರು ಯಾರೊಬ್ಬರ ಸಾದ್ಯಂತ ವೃತ್ತಾಂತವನ್ನು ಹೇಳುವರು.

ಶ್ರೀನಿವಾಸರಾಯರು ತಮ್ಮ ಆಯುಷ್ಯದಲ್ಲಿ ಅನೇಕಾನೇಕ ಧರ್ಮಕೃತ್ಯಗಳನ್ನು ಮಾಡಿರುವರು. ತಿರುಪತಿಯ ಮಧ್ವಮತದ ಮಹಾಸಭೆಗೆ ಮೂರುನೂರು ರೂಪಾಯಿಗಳನ್ನು ಕೊಟ್ಟಿರುವದಲ್ಲದೆ ವರ್ಷಾನುವರ್ಷ ಸಭೆಯ ಕಾಲಕ್ಕೆ ಶ್ರೀವೆಂಕಟೇಶನ ದರ್ಶನಕ್ಕಾಗಿ ಹೋಗುತ್ತಿರುವರು. ಪುಣೆಯಲ್ಲಿಯ ವೇದಶಾಲೆಗೆ ಐದುನೂರು ರೂಪಾಯಿ ಕೊಟ್ಟಿರುವರು. ಇಲ್ಲಿಯ ಟ್ರೇನಿಂಗ ಕಾಲೇಜದೆದುರಿಗೆ ಎಡ್ವರ್ಡಬಾದಶಹರ ಪಟ್ಟಾಭಿಷೇಕದ ಸ್ಮಾರಕವೆಂದು ಅಶ್ವಸ್ಥ ವೃಕ್ಷವನ್ನು ಹಚ್ಚಿ ಅದರ ಸುತ್ತಲೂ ಸುಂದರವಾದ ಕಟ್ಟೆಯನ್ನು ಕಟ್ಟಿಸಿ ತಮ್ಮ ರಾಜನಿಷ್ಠೆಯನ್ನು ವ್ಯಕ್ತಗೊಳಿಸಿದ್ದಾರೆ; ಮತ್ತು ಕಟ್ಟೆಯ ಹತ್ತರವೇ ತಮ್ಮ ಪ್ರಿಯಭಾರ್ಯೆಯ ಸ್ಮಾರಕವೆಂದು ಅರವಟ್ಟಿಗೆಯನ್ನಿಟ್ಟು ಜನರಿಗೆ ನೀರು ಸಿಗುವಂತೆ ವ್ಯವಸ್ಥೆಮಾಡುವ ಕುರಿತು ಸರಕಾರದಲ್ಲಿ ಸಾಕಷ್ಟು ಹಣದ ವ್ಯವಸ್ಥೆ ಮಾಡಿರುವರು. ಸ್ತ್ರೀಶಿಕ್ಷಣಕ್ಕೆ ಉತ್ತೇಜನ ಕೊಡುವದಕ್ಕಾಗಿ ಮೂರುನೂರು ರೂಪಾಯಿಗಳನ್ನು ಸರಕಾರದಲ್ಲಿಟ್ಟು ಅದರ ಉತ್ಪನ್ನದಲ್ಲಿ ಹೆಣ್ಣು ಮಕ್ಕಳ ಕಾಲೇಜದ ವಿದ್ಯಾರ್ಥಿನಿಯರಿಗೆ ಇನಾಮು ಕೊಡುವ ವ್ಯವಸ್ಥೆಮಾಡಿದ್ದಾರೆ. ಇದೂ ಅಲ್ಲದೆ ಕಾಲಕಾಲಕ್ಕೆ ಇನ್ನೂ ಅನೇಕ ಸಂಸ್ಥೆಗಳಿಗೆ ರಾಯರು ತಕ್ಕ ಸಹಾಯಮಾಡಿದ್ದಾರೆ. ನಾಲ್ಕೈದು ಬಡ ಲಗ್ನಗಳನ್ನು ರಾಯರು ತಮ್ಮ ಸ್ವಂತ ವೆಚ್ಚದಿಂದಲೇ ಮಾಡಿರುವರು. ಬ್ರಾಹ್ಮಣಧರ್ಮದ ಅಭಿಮಾನವು ರಾಯರಿಗೆ ಬಹಳ; ಆದರೂ ಪರಧರ್ಮಸಹಿಷ್ಣುತೆಯು ಅವರಲ್ಲಿ ಇಲ್ಲವೆಂದು ತಿಳಿಯುವಂತಿಲ್ಲ. ಇದೇ ತಿಂಗಳ ಧಾರವಾಡದಲ್ಲಿ ಕೂಡಿದ ಬ್ರಾಹ್ಮಣಸಭೆಯು ಅವರ ನೇತೃತ್ವದ ಕೆಳಗೆ ಕೂಡಿತ್ತು; ಅವರೇ ಆ ಸಭೆಯ ಸ್ವಾಗತಮಂಡಲದ ಅಧ್ಯಕ್ಷರಾಗಿದ್ದರು; ಕಿಂಬಹುನಾ ಅವರ ಪರಿಶ್ರಮದಿಂದಲೇ ಆ ಸಭೆಯ ತೀರ್ಮಾನಗಳು ನೆರವೇರಿಸಲ್ಪಡುವಂತಿರುವವು.

ರಾಯರ ಕುಟುಂಬದ ವಿಷಯವಾಗಿ ಬರೆಯುವದೆಂದರೆ, ಅವರಿಗೆ ಗಂಡು ಸಂತತಿಯು ಇಲ್ಲದಿದ್ದಾಗ್ಯೂ ಇಬ್ಬರು ಹೆಣ್ಣು ಮಕ್ಕಳಿದ್ದು, ಅವರಿಬ್ಬರನ್ನೂ **ಸತ್ಕುಲಸಂಜಾತ**ರಾದ ಅಣ್ಣತಮ್ಮಂದಿರಿಗೆ ಕೊಟ್ಟಿದ್ದು ಅಳಿಯರಿಬ್ಬರೂ ಸರಕಾರದ ನವಕರಿಯಲ್ಲಿರುವರು. ಇಂದಿಗೆ ರಾಯರು ಮೊಮ್ಮಕ್ಕಳನ್ನು ಸಹ ಕಂಡಿದ್ದು ಅವರಲ್ಲಿ ಎಲ್ಲರಿಗೂ ಹಿರಿಯರಾದವರು ಇದೇ ಸಾರೆ ಬಿ. ಎ. ಪರೀಕ್ಷೆಯನ್ನು ಮೇಲ್ಪಂಕ್ತಿಯಲ್ಲಿ ತೇರ್ಗಡೆ ಹೊಂದಿರುವರು. ಇವರು ಜಾಣರಾಗಿದ್ದು, ಇವರಿಂದ ರಾಯರ ವಂಶದ ಹೆಸರು ಮುಂದೆ ಬರುವದೆಂದು ಭರವಸೆಯುಂಟು. ಇವರೆಲ್ಲರನ್ನು ಕೂಡಿಕೊಂಡು ರಾಯರು

ಇದೇ ಊರಲ್ಲಿರುವ ತಮ್ಮ ಸ್ವಂತ ಬಂಗಲೆಯಲ್ಲಿ ಪುಣ್ಯದ ಫಲವನಬಹಾದೂರ ತ್ತಿರುವರು. ...ಖವು ತಕ್ಕ

ಶ್ರೀನಿವಾಸರಾಯರ ಗಂಭೀರವಾದ ಮುಖಮುದ್ರೆಯೂ ಸ್ಥೂಲ...ಷ್ಟ ಅಗ್ರಿಕ ಆದ ದೇಹವೂ ನೋಡುವವರಿಗೆ ಒಂದು ಬಗೆಯ ಅಂಜಿಕೆಯನ್ನು ಹ... ಅಂಗವ ಆದರೆ ಅವರ ಅನಂತಪಾರವಾದ ಅಂತಃಕರಣವೂ, ಔದಾರ್ಯವೂ ಸ...ದಿರು ಕಾರ್ಯಸ್ಫೂರ್ತಿಯೂ ಆ ಭೀತಿಯನ್ನು ದೂರಮಾಡಿ ಅವರ ವಿಷಯವಾಗಿ ... ವಿಶ್ವಾಸಗಳನ್ನೂ ಪ್ರೀತಿವಿನಯಗಳನ್ನೂ ಹುಟ್ಟಿಸದೆ ಬಿಡವು. ರಾಯರ ಆಶ್ವಾಸನಗಳು ದೇವವಾಣಿಯನ್ನೇ ಹೋಲುತ್ತಿರುವವು. ಕಷ್ಟದಿಂದ ಬಳಲಿ ಹೋಗಿ ಅವರ ಆಶ್ರಯ ವನ್ನು ಹೊಂದಿದ ದೀನನು ನಿರಾಶೆಯಿಂದ ಮರಳಿ ಬರುವದು ಅಪರೂಪ. ಈ ಮಹನೀ ಯರ ಗುಣಾನುವಾದವನ್ನು ಎಷ್ಟು ಮಾಡಿದರೂ ಕಡಿಮೆಯೇ ಸರಿ. ರಾಯರ ಮಾತೃ ಭಕ್ತಿಯು ಅನುಕರಣೀಯವಾಗಿತ್ತೆಂದು ಹೇಳುವದನ್ನು ಕೇಳಬಲ್ಲೆವು. ಅವರ ಮಾತೃ ಶ್ರೀಯವರು ಸತತ ಪ್ರಯತ್ನದಿಂದಲೂ ಪುತ್ರವಾತ್ಸಲ್ಯದಿಂದಲೂ ಕೊಟ್ಟ ಸತ್‌ಶಿಕ್ಷ ಣವು ರಾಯರ ಘನತೆಗೆ ಕಾರಣವಾಗಿತ್ತೆಂಬದರಲ್ಲಿ ಸತ್ಯಾಂಶವುಂಟು. ಇಂಥ ಮಾತೃ ದೇವತೆಯ ವಿಯೋಗವು ರಾಯರಿಗಾಗಿ ಹದಿನೈದು ವರ್ಷಗಳಾದವು. ಅವರ ಜೀವಿತ ಕಾಲದಲ್ಲಿ ಅವರ ವಚನವನ್ನು ಪಾಲಿಸಲಿಕ್ಕೆ ಎಂದೂ ತಪ್ಪದ ಶ್ರೀನಿವಾಸರಾಯರು ಮಾತೃದೇವಿಯ ನಿಧನದಲ್ಲಿ ಅವರ ಕಲೇವರವನ್ನು ಅಗ್ನಿಸಂಸ್ಕಾರ ಮಾಡಿದ ಸ್ಥಲದಲ್ಲಿ ಮಾತೃಭಕ್ತಿಯ ಕುರುಹೆಂದು ವೃಂದಾವನವೊಂದನ್ನು ನಿರ್ಮಿಸಿ ಮಾತೃದೇವತೆಯ ನಾಮವನ್ನು ಚಿರಸ್ಮರಣೀಯಮಾಡಿ ಕೃತಕೃತ್ಯರಾಗಿರುವರು! “ **नमातुः परदैवतम् । मातृदेवो भव ॥** ” ಎಂಬ ಉಕ್ತಿಯನ್ನು ರಾಯರು ಕೃತಿಗಳಿಂದಲೂ ವರ್ತನದಿಂದಲೂ ಸಫಲಮಾಡಿರುವರು!!

ಸ್ವಂತ ಪ್ರಯತ್ನದಿಂದ ಘನತೆಗೇರಿದ ಈ **ಕರ್ನಾಟಕ ಮಹಾಪುರುಷರ** ಚರಿತ್ರವು ಕರ್ನಾಟಕಸ್ಥರಿಗೆ ಬೋಧಪ್ರದವಾಗಿರುವದೆಂದು ಹೇಳಿದರೆ ಅತಿಶಯೋಕ್ತಿ ಯಾಗಲಿಕ್ಕಿಲ್ಲ. ಶ್ರೀನಿವಾಸರಾಯರಿಂದ ಇನ್ನೂ ಧರ್ಮಕೃತ್ಯಗಳೂ ಸಾರ್ವಜನಿಕ ಹಿತವೂ ಜರುಗಲೆಂದೂ ಅವರಿಗೆ ಪರಮಾತ್ಮನು ಆಯುರಾರೋಗ್ಯಗಳನ್ನು ಸಂವರ್ಧಿಸಲೆಂದೂ, ಅವರು ರಾಜ-ಪ್ರಜರಿಗೆ ಪ್ರಿಯರಾಗಿ ಹೆಚ್ಚೆಚ್ಚು ಗೌರವ ಪಡೆಯಲೆಂದೂ ಕಲ್ಯಾಣ ಮಾಡಲೆಂದೂ ರಾಯರ ಆಯುಷ್ಕ್ರಮಣದ ಸವಿಸ್ತರ ವೃತ್ತಾಂತವನ್ನು ಬರೆಯಲಿಕ್ಕೂ ಓದಲಿಕ್ಕೂ ದೇವರು ಕರ್ನಾಟಕಸ್ಥರಿಗೆ ಬುದ್ಧಿಯನ್ನು ಕೊಡಲೆಂದೂ ತಿರುಪತಿಯ ... ...ಕೊಳ್ಳುತ್ತೇವೆ.



